# ಈದ್ ವರ್ಷಕ್ಕೆ ಎರಡು ಮಾತ್ರವೇ..?

ಮುನೀರ್ ಸಖಾಫಿ ಸಾಲೆತ್ತೂರು

ಒಳಗೇನಿದೆ_.:

★ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರ ಜನ್ಮದಿನಾಚರಣೆಗೆ ಮಹತ್ತರವಾದ ಪ್ರತಿಫಲ ಇದೆ ಇಬ್ನುತೀಮಿಯ್ಯಾ:

★ಮೌಲಿದ್ ಕಿತಾಬ್ ರಚಿಸಿದ ಮಹಾತ್ಮರು:

ಅಹ್ಲುಸುನ್ನತಿ ವಲ್ ಜಮಾಅತ್ ವಾಟ್ಸಪ್ ಗ್ರೂಪ್

ಈ ವರ್ಷದಲ್ಲಿ 50 ಮಿಕ್ಕ ಈದ್ ಇದೆ.
ಜಾಗತಿಕ ಮುಸ್ಲಿಮರು ಪ್ರವಾದಿ ಸಲ್ಲಲ್ಲಾಹು ಅಲೈಹಿವಸಲ್ಲಮರ ಮೀಲಾದ್ ಆಚರಿಸುವಾಗ ವಹ್ಹಾಬಿಗಳು ಹೇಳುವ ಒಂದು ಬಾಲಿಶ ವಾದವಾಗಿದೆ ಈದ್ ವರ್ಷಕ್ಕೆ ಎರಡು ಬಾರಿ ಮಾತ್ರ ಎಂಬುವುದು.ಅಥವಾ ಈದುಲ್ ಫಿತರ್ ಮತ್ತು ಈದುಲ್ ಅಳ್'ಹಾ.

ಸತ್ಯಕ್ಕೆ ವಿರುದ್ಧವಾದ ಒಂದು ವಾದವಾಗಿದೆ ಇದು.
ಅದಕ್ಕೆ ಅವರು ಒಂದು ಹದೀಸನ್ನು ದುರ್ವ್ಯಾಖ್ಯಾನಿಸುತ್ತಾರೆ.
ಅದು ಈ ರೀತಿ,

عَنْ أَنَسِ بْنِ مَالِك، قَالَ: كَانَ لِأَهْلِ الْجَاهِلِيَّةِ يَوْمَانِ فِي كُلِّ سَنَةٍ يَلْعَبُونَ فِيهِمَا، فَلَمَّا قَدِمَ النَّبِيُّ صَلَّى اللهُ عَلَيْهِ وَسَلَّمَ الْمَدِينَةَ، قَالَ: "

كَانَ لَكُمْ يَوْمَانِ تَلْعَبُونَ فِيهِمَا وَقَدْ أَبْدَلَكُمُ اللَّهُ بِهِمَا خَيْرًا مِنْهُمَا: يَوْمَ الْفِطْرِ، وَيَوْمَ الْأَضْحَى. نسائي 3/179).

ಅನಸ್ (ರ)ಹೇಳುತ್ತಾರೆ: "ಜಾಹಿಲಿಯ್ಯಾ ಕಾಲದಲ್ಲಿ ಅವರಿಗೆ 2 ದಿನಗಳು ವಿನೋದದ ದಿನವಾಗಿತ್ತು.

ಪ್ರವಾದೀ صلى الله عليه وسلم ರು ಮದೀನಾಗೆ ಹಿಜ್ರ ಹೋದಾಗ ಅವರೊಂದಿಗೆ ಹೇಳಿದರು;ಇದನ್ನು ಬದಲಾಯಿಸಿ ಇದಕ್ಕಿಂತ ಉತ್ತಮವಾದ ಈದುಲ್ ಫಿತ್ರ್ ಮತ್ತು ಈದುಲ್ ಅಳ್'ಹವನ್ನು ಅಲ್ಲಾಹನು ನಿಮಗೆ ನೀಡಿದ್ದಾನೆ." (ನಸಾಈ 3/179).

ವರ್ಷಕ್ಕೆ ಈದ್ 2 ಮಾತ್ರವೆಂದು ಇದರಿಂದ ತಿಳಿದು ಬರುತ್ತದೆ ಎಂದಾಗಿದೆ ಸಲಫಿಯ ವಾದ.

ಹದೀಸನ್ನು ಬೇಕಾದಂತೆ ಗ್ರಹಿಸದ ಕಾರಣದಿಂದ ಈ ರೀತಿಯ ವಿಚಿತ್ರ ವಾದವನ್ನು ಅವರು ಹೇಳುತ್ತಿದ್ದಾರೆ. ವಾಸ್ತವದಲ್ಲಿ

ಪ್ರವಾದಿ صلى الله عليه وسلم ರು ಅವರಲ್ಲಿ "ನೀವು ಉತ್ಸವವಾಗಿ ಕಾಣುವ ಈ ಎರಡು ದಿನಗಳಿಗೆ ಬದಲಾಗಿ 2 ಈದ್ ಗಳು ಪುಣ್ಯದಾಯಕವಾಗಿದೆ" ಎಂದು ಹೇಳಿದ್ದಾರೆಯೇ ಹೊರತು ಈದ್ 2 ಮಾತ್ರವಿರುವುದು ಎಂದು ಹೇಳಿಲ್ಲ.ಬುದ್ಧಿಯಿರುವ ಯಾರಿಗೂ ಇದು ತಿಳಿಯುವ ವಿಚಾರ.

ಮಂಗಳೂರು ಮತ್ತು ಪುತ್ತೂರು ದೊಡ್ಡ ಸಿಟಿ ಎಂದು ಹೇಳಿದ ಒಬ್ಬನಲ್ಲಿ ನಾನು ಹೇಳಿದೆ.ಅದಕ್ಕಿಂತಲೂ ದೊಡ್ಡ ಸಿಟಿ ಮೈಸೂರು ಮತ್ತು ಬೆಂಗಳೂರು ಇದೆ. ಆವಾಗ ನನ್ನ ಮಾತನ್ನು ತಪ್ಪಾಗಿ ಅರ್ಥೈಸಿ ಸಿಟಿಯಿರುವುದು ಮೈಸೂರು ಮತ್ತು ಬೆಂಗಳೂರು ಮಾತ್ರವೆಂದು ಅವರು ಹೇಳಿದ್ದಾರೆ ಎಂದು ಒಬ್ಬ ಹೇಳಿದರೆ ಆತನನ್ನು ಹುಚ್ಚಾಸ್ಪತ್ರೆಯಲ್ಲಿ ಕಟ್ಟಿಯಿಡಬೇಕಾದೀತು.ಅದೇ ರೀತಿಯಾಗಿದೆ ಸಲಪಿಯ ಅರ್ಥ ಕೂಡಾ.

ಈ ಎರಡು ಈದ್"ನ ಬಗ್ಗೆ ಹೇಳಿದ

ಅದೇ ಪ್ರವಾದೀ ﷺ ರು
ಶುಕ್ರವಾರದ ಕುರಿತು ಹೇಳಿದ ಹದೀಸ್ ನೋಡಿ,

عن ابن عباس قال :قال رسول الله صلى الله عليه وسلم إن هذا يوم عيد .جعله الله للمسلمين. فمن جاء إلى الجمعة فليغتسل .وإن كان طيب فليمس منه. وعليكم بالسواك

ابن ماجه 1/349 ))

ಇಬ್ನ್ ಅಬ್ಬಾಸ್(ರ)ವರದಿ;
ಪ್ರವಾದೀ ಸಲ್ಲಲ್ಲಾಹು ಅಲೈಹಿವಸಲ್ಲಮರು

ಹೇಳುತ್ತಾರೆ,“ಖಂಡಿತವಾಗಿಯೂ ಈ ದಿನ (ಶುಕ್ರವಾರ) ಮುಸ್ಲಿಮರಿಗೆ ಅಲ್ಲಾಹನು ಮಾಡಿದ ಈದ್ ಆಗಿದೆ.ಆದುದರಿಂದ ಜುಮುಅ ನಮಾಝ್ ಗೆ ಬರುವವನು ಸ್ನಾನ ಮಾಡಲಿ.

ಸುಗಂಧ ದ್ರವ್ಯವಿದ್ದಲ್ಲಿ ಹಚ್ಚಲಿ.”(ಇಬ್ನ್ ಮಾಜ 1/349)
ಅದೇ ರೀತಿ ಮುವತ್ವ 1/65,ಮುಸ್ನದು ಶ್ಯಾಫಿಈ 1/63 ರಲ್ಲೂ ಕಾಣಬಹುದಾಗಿದೆ.
ಈ ಹದೀಸ್ ಸ್ವೀಕಾರ್ಯಯೋಗ್ಯವಾಗಿದೆಯೆಂದು ವಹ್ಹಾಬೀ ನಾಯಕ ಅಲ್ಬಾನಿಯೇ ಸಮ್ಮತಿಸಿದ್ದಾರೆ. (ಇಬ್ನ್ ಮಾಜ ಟಿಪ್ಪಣಿ 1/349)

ಎಲ್ಲಾ ವಾರಗಳಲ್ಲೂ ಈದ್ ಇದೆ ಎಂದು ಈ ಹದೀಸಿನಿಂದ ಬಹಳ ಸ್ಪಷ್ಟ.
ಒಂದು ಹದೀಸನ್ನು ಅಂಗೀಕರಿಸಿ ಇನ್ನೊಂದು ಹದೀಸ್ ತಿರಸ್ಕರಿಸುವುದು ಒಮ್ಮೆಯೂ ಮುಸ್ಲಿಮನಿಗೆ ಭೂಷಣವಲ್ಲ.
ಶುಕ್ರವಾರ ದಿನ ಈದ್ ಆಗಲು ಕಾರಣವೇನೆಂದು ಪ್ರವಾದೀ ಸಲ್ಲಲ್ಲಾಹು ಅಲೈಹಿವಸಲ್ಲಮರೇ

ಬೇರೊಂದು ಹದೀಸಿನಲ್ಲಿ ವಿವರಿಸಿದ್ದಾರೆ.

عن ابي هريرة قال رسول الله صلى الله عليه وسلم خير يوم طلعت فيه الشمس يوم الجمعة فيه خلق ادم وفيه ادخل الجنة وفيه اخرج من النار.

مسلم (3/6))

"ದಿವಸಗಳ ಪೈಕಿ ಶ್ರೇಷ್ಠವಾದ ದಿವಸ ಶುಕ್ರವಾರವಾಗಿದೆ.ಆ ದಿನ ಆದಮ್ ನೆಬಿಯನ್ನು ಸೃಷ್ಟಿಸಲಾಗಿದೆ.ಅದೇ ದಿನ ಸ್ವರ್ಗಕ್ಕೆ ಅವರನ್ನು ಪ್ರವೇಶಿಸಲಾಯಿತು ಹಾಗೂ ಶುಕ್ರವಾರ ಸ್ವರ್ಗದಿಂದ

ಹೊರಕಳುಹಿಸಲಾಯಿತು."(ಮುಸ್ಲಿಂ 3/6)

ಆದಮ್ ನೆಬಿಯುವರನ್ನು ಸೃಷ್ಟಿಸಿದ ದಿವಸ ಎಂಬ ಕಾರಣಕ್ಕೆ ಶುಕ್ರವಾರಕ್ಕೆ ಮಹತ್ವ ಲಭಿಸಿರುವುದಾದರೆ ಅವರಿಗಿಂತಲೂ ಶ್ರೇಷ್ಠರಾದ ಪ್ರವಾದೀ ಮುಹಮ್ಮದ್

صلى الله عليه وسلم ರು

ಜನಿಸಿದ ದಿವಸಕ್ಕೆ ಖಂಡಿತವಾಗಿಯೂ ಅದಕ್ಕಿಂತಲೂ ಮಹತ್ವ ಇದೆ ಎಂಬುವುದರಲ್ಲಿ ಸಂಶಯವಿಲ್ಲ.

ಆದಮ್ ನೆಬಿಯನ್ನು ಸೃಷ್ಟಿಸಲ್ಪಟ್ಟ ಶುಕ್ರವಾರವನ್ನು ಈದ್ ಎಂದು ಹೇಳಬಹುದಾದರೆ ಪ್ರವಾದೀ 

ರು ಜನಿಸಿದ ರಬೀವುಲ್ 12 ನೇ ದಿನಕ್ಕೆ ಈದ್ ಮೀಲಾದ್ ಎನ್ನುದರಲ್ಲಿ ಯಾವುದೇ ತಪ್ಪಿಲ್ಲ

★★★

# ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರ ಜನ್ಮದಿನಾಚರಣೆಗೆ ಮಹತ್ತರವಾದ ಪ್ರತಿಫಲ ಇದೆ ಇಬ್ನುತೀಮಿಯ್ಯಾ:

---

ಸಳಪಿ,ಜಮಾಅತೇ ಇಸ್ಲಾಮಿ, ತಬ್ಲೀಗ್ ಮುಂ-
ತಾದ ನೂತನ ಪಂಥಗಳ ಮೌಲವಿ ಪುರೋಹಿತರು
ತಮ್ಮ ಸ್ವಾರ್ಥ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳುದಕ್ಕಾಗಿ
ಕುರ್ಆನ್. ಸುನ್ನತನ್ನು ಸಮರ್ಪಕವಾಗಿ ತಿಳಿಯದೆ
ಪೂರ್ವಿಕ ಮಹಾತ್ಮರ ಕಿತಾಬ್ ಗಳಲ್ಲಿರುವ
ಅನೇಕಾನೇಕ ಸತ್ಯಾಂಶಗಳನ್ನು ಜನಸಮಾನ್ಯರಿಂದ
ಮುಚ್ಚಿಡುತ್ತಿದ್ದಾರೆ.
ಜನಾಬ್ ಇಬುನುತೀಮಿಯ್ಯಾ. ಸುನ್ನಿಗಳಿಗೆ
ಅಪರಿಚಿತರಾದರೇ.... ಸಲಪಿ,ಜಮಾಅತೇ
ಇಸ್ಲಾಮೀಯರಿಗೆ ಚಿರಪರಿಚಿತರು. ಈ ಬಗ್ಗೆ ಅವರ

ಮಾತಿನಿಂದಲೇ ತಿಳಿಯೋಣ.
ಸಲಫಿಗಳ ಮೌಲವಿ ಮುಹಮ್ಮದ್ ಕುಟ್ಟಿಶ್ಶೇರಿ ಬರೆದಿರುವುದು ನೋಡಿ "ಇಬ್ನುತೀಮಿಯ್ಯ: ತಮ್ಮ ಮೂವತ್ತನೇ ವಯಸ್ಸಿನಲ್ಲಿ ಕೊನೆಯ ಮುಜ್‌ತಹಿದ್ ಎಂಬ ಹಿರಿಮೆಗೆ ಪಾತ್ರರಾದರು ಚಿಂತಾನ ಲಹರಿಯಲ್ಲಿ ಕೋಲಾಹಲ ಸೃಷ್ಟಿಸಿದ ಅವರು ಕುರುಡು ನಂಬಿಕೆ .ಕೆಟ್ಟ ಆಚಾರಗಳ ವಿರುದ್ಧ ಸಮರ ಸಾರಿದವರಾಗಿದ್ದಾರೆ"(ಇಸ್ಲಾಹಿ ಪ್ರಸ್ಥಾನ ಚರಿತ್ರತಿನೊರು ಆಮುಗಂ ಏಓಒ ಪ್ರಕಾಶನ ಪುಟ 8-9)

ಅದೇ ರೀತಿ ಸಲಪಿ ಗಳ ಒಂದು ಪತ್ರಿಕೆ ಇಬ್ನುತೀಮಿಯ್ಯಾ ರನ್ನು ಪರಚಯಿಸಿದ್ದು "'ಹಿಜಿರ 661 ರಲ್ಲಿ ಜನಿಸಿದರು ಪ್ರಾಥಮಿಕ ವಿದ್ಯಾಭ್ಯಾಸವನ್ನು ತನ್ನ ತಂದೆಯಿಂದಲೇ ಪಡೆದರು. ವಿದ್ವಾಂಸರಿಂದ ತುಂಬಿದ ಕುಟುಂಬವಾಗಿತ್ತು ಅವರದ್ದು. ಧರ್ಮ

ಜ್ಞಾನದ ವಿಷಯದಲ್ಲಿ ಅವರೊಂದು ದೊಡ್ಡ ಸಂಪತ್ತಾಗಿದ್ದರು. ಕುರಾಫತ್ ಮತ್ತು ಬಿದ್‌ಅತ್ ಗಾರರನ್ನು ಅತ್ಯಂತ ಕಠಿಣವಾಗಿ ವಿರೋಧಿಸುವವರಾಗಿದ್ದರು. ಮುಟ್ಟಿದನ್ನೆಲ್ಲಾ ಚೆನ್ನವಾಗಿ ಪರಿವರ್ತನೆ ಮಾಡುವಂತಹ ವ್ಯಕ್ತಿತ್ವ ಅವರಿಗಿತ್ತು.ಬಿದ್‌ಅತನ್ನು ಕಿತ್ತೆಸೆದು ಆ ಜಾಗದಲ್ಲಿ ಸುನ್ನತನ್ನು ಪ್ರತಿಷ್ಠಾಪಿಸಲು ಅವರು ತನ್ನ ಜೀವನವನ್ನೇ ವ್ಯಯಿಸಿದರು...

ಕುರ್‌ಆನಿನಲ್ಲಿ ಹದೀಸಿನಲ್ಲಿ ಅಥವಾ ಅದನ್ನು ಮೂಲವಾಗಿಟ್ಟು ಸ್ವಹಾಬಿಗಳ ಚರ್ಯೆಯಲ್ಲಿ ಒಂದು ವಿಷಯಕ್ಕೆ ಪುರಾವೆ ಕಾಣದಿದ್ದರೆ ಆ ವಿಷಯ ಹೇಳಿದ್ದು ಎಷ್ಟು ದೊಡ್ಡ ಮಹಾನರಾದರೂ ಸರಿ ಅವರು ಅದನ್ನು ಸ್ವೀಕರಿಸುತ್ತಿರಲಿಲ್ಲ. ಅವರ ಫತ್ವಗಳೆಲ್ಲವೂ ಕುರ್‌ಆನ್,ಹದೀಸ್,ಕಿಯಾಸ್,ಇಜ್ ಮಾಅ್‌ಗಳನ್ನು ಅವಲಂಬಿಸಿಯಾಗಿತ್ತು. ಅದಕ್ಕೆ ವಿರುದ್ಧವಾಗಿ ಆ ಮುಂಚೆ ಹೇಳಿದ ಯಾರ

ಮಾತಿನತ್ತಲೂ ಅವರು ತಿರುಗಿ ನೋಡುತ್ತಿರಲಿಲ್ಲ.’ (ತೀವ್ರ ವಹ್ಹಾಬಿ ಮಾಸಿಕ: 2001 ಫೆಬ್ರವರಿ ಪುಟ - 19)

ಅದೇ ರೀತಿ ಇಬುನುತ್ತೀಮಿಯ್ಯಾರ ಕುರಿತು ಜಮಾಅತೇ ಇಸ್ಲಾಮೀಯರು ಹೇಳಿದ್ದು ನೋಡಿ: "

‘ಶೈಖುಲ್ ಇಸ್ಲಾಮ್ ಇಬುನುತೀಮಿಯ್ಯ ತನ್ನ ಜನತೆಯನ್ನು ಸಂಸ್ಕರಿಸಲು ಪ್ರಾರಂಭಿಸಿದ್ದು ಆ ಸಂಧರ್ಭದಲ್ಲಾಗಿತ್ತು. ಇತರ ಎಲ್ಲಾ ಜ್ಞಾನ ಶಾಖೆಗಿಂತಲೂ ಹೆಚ್ಚಾಗಿ ಹದೀಸ್ ನಲ್ಲಿ ಅವರು ಅಗಾಧ ಪಾಂಡಿತ್ಯವನ್ನು ಕರಗತ ಮಾಡಿಕೊಂಡಿದ್ದರು. ಸತ್ಯವನ್ನು ಬಿಚ್ಚಿಹೇಳುವ ವಿಷಯದಲ್ಲಿ ಯಾರನ್ನು ಸಹ ಹೆದರುತ್ತಿರಲಿಲ್ಲ ಇದು ಶೈಖ್ ರವರಲ್ಲಿ ಕಂಡುದಂತಹ ವಿಶೇಷತೆಯಾಗಿದೆ.’"(ಇಸ್ಲಾಮಿತ ನವೋತ್ಥಾನ ಪ್ರಸ್ತಾನ ಒಲ್ ಪುಟ -50 ಟಿ.ಮುಹಮ್ಮದ್,

IPH ಪ್ರಕಾಶನ)

ಸಲಫಿಗಳ ಮತ್ತು ಜಮಾಅತೇ ಇಸ್ಲಾಮೀಯರ ಮಧ್ಯೆ ಕೆಲವು ವಿಷಯಗಳಲ್ಲಿ ಭಿನ್ನಾಭಿಪ್ರಾಯವಿದ್ದರೂ ಇಬುನುತೀಮಿಯ್ಯರ ಕುರಿತು ಎರಡು ಪಂಥಗಳೂ ಸರಿ ಸಮಾನ ಒಂದೇ ರೀತಿಯ ಅಭಿಪ್ರಾಯಗಳನ್ನು ತಾಳಿದ್ದಾರೆಂಬುದನ್ನು ಇದು ಸ್ಪಷ್ಟ ಪಡಿಸುತ್ತದೆ. ಸಲಫಿಗಳಿಗೆ ಇಬುನ್ನುತೀಮಿಯ್ಯ ಕೊನೆಯ ಮುಜ್‌ತಹಿದ್ ಹಾಗೂ ಕುರ್‌ಆನ್, ಹದೀಸ್, ಇಜ್ ಮಾಅ್, ಕಿಯಾಸ್‌ಗಳನ್ನು ಅವಲಂಬಿಸಿ ಫತ್ವ ನೀಡಿದ ಬಿದ್‌ಅತ್ತನ್ನು ಕಿತ್ತೆಸೆದು ಆ ಜಾಗದಲ್ಲಿ ಸುನ್ನತನ್ನು ಸ್ಥಾಪಿಸಲು ಜೀವನವನ್ನೇ ವ್ಯಯಿಸಿದ ಮಹಾನ್ ವ್ಯಕ್ತಿಯಾಗಿದ್ದಾರೆ. ಜಮಾಅತೇ ಇಸ್ಲಾಮಿಯರಿಗೆ ಸತ್ಯವನ್ನು ಬಿಚ್ಚಿ ಹೇಳುದರಲ್ಲಿ ಜಗತ್ತಿನಲ್ಲಿ ಯಾರನ್ನೂ ಸಹ ಭಯಪಡದ ಶೈಖುಲ್ ಇಸ್ಲಾಂ ಆಗಿದ್ದಾರೆ. ಒಟ್ಟಿನಲ್ಲಿ ಇಬ್ನುತೀಮಿಯ್ಯರವರು

ಅಭಿಪ್ರಾಯಗಳನ್ನು ಕುರ್‌ಆನ್. ಸುನ್ನತ್‌ಗೆ ಹೊಂದಿ ಕೊಡಿದೆಯೆಂದೂ ಅವರ ಫತ್ವಾಗಳನ್ನು ಪ್ರಾಮಾಣಿಕ ವಾದುದೆಂದೂ ಈ ಎರಡು ವಿಭಾಗವೂ ಅಂಗೀಕರಿಸಿದ್ದಾರೆ ಹಾಗೂ ದೃಢವಾಗಿ ನಂಬಿದ್ದಾರೆ ಎಂದು ಇದರಿಂದ ಬಹಳ ಸ್ಪಷ್ಟ.

ಅಂತಹ ಇಬ್ ನುತೀಮಿಯ್ಯರವರೇ ಮುಸ್ಲಿಮರು ಗೌರವಿಸುವ. ಆಚರಿಸುವ  ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮ ರವರ ಜನ್ಮದಿನದ ಬಗ್ಗೆ ಬರೆದಿರುವುದು ನೋಡಿ:

"فتعظيمُ المولد، واتخاذُه موسمًا، قد يفعله بعضُ الناس، ويكون له فيه أجر عظيم لحسن قصده، وتعظيمه لرسول الله صلى الله عليه وسلم"

"ನೆಬಿ ಸ್ವಲ್ಲಲಾಹು ಅಲೈಹಿ ವಸಲ್ಲಮರ ರವರ ಜನ್ಮದಿನವನ್ನು ಗೌರವಿಸುವವರಿಗೂ ಅದನ್ನು ಸಂಭ್ರಮ ದಿನವನ್ನಾಗಿ ಮಾಡಿದವರಿಗೂ ಅತೀ ಮಹತ್ತರವಾದ

ಪ್ರತಿಫಲವಿದೆ. ಕಾರಣ ಅವರ ಉದ್ದೇಶ ಒಳ್ಳೆಯದಿದೆ. ಹಾಗೂ ನೆಬಿ ಸ್ವಲ್ಲಲ್ಲಾಹು ಅಲೈಹಿ ವಸಲ್ಲಮರವನ್ನು ಗೌರವಿಸುವ ಕಾರ್ಯವೂ ಅದರಲ್ಲಿದೆ.."

{ಗ್ರಂಥ -ಇಖ್ ತಿಳಾಉಸ್ಸಿರಾತಿಲ್ ಮುಸ್ತಖೀಮ್ ಪುಟ 274, ರಚನೆ -ನೂತನವಾದಿ ಮಹಾ ನಾಯಕ ಇಬ್ನುತೀಮಿಯ್ಯ.}



ಮೀಲಾದುನ್ನಬೀ ಎಂಬುವುದು ಖಂಡಿತವಾಗಿಯೂ ಪ್ರತಿಫಲವಿರುವ ಕರ್ಮವಾಗಿದೆ. ನೂತನ ವಾದಿಗಳ ನಾಯಕ ಇಬ್ನ್ ತೀಮಿಯ್ಯ ಕೂಡಾ ಇದನ್ನು ಅಂಗೀಕರಿಸಿದ್ದಾರೆ.

ಶತಮಾನಗಳ ಪಾರಂಪರ್ಯವಿರುವ ಮೌಲಿದ್ ಕಾರ್ಯಕ್ರಮ ಎಲ್ಲರೂ ಆಚರಿಸಿದ್ದಾರೆ.

ಎಲ್ಲಾ ಕಾಲದಲ್ಲಿಯೂ ಉಲಮಾಗಳು ಮೌಲಿದನ್ನು ಒಳ್ಳೆಯ ಕಾರ್ಯವಾಗಿ ಸಮ್ಮತಿಸಿದ್ದಾರೆ.

ಆದುದರಿಂದಲೇ ಎಲ್ಲಾ ರಾಷ್ಟ್ರಗಳಲ್ಲೂ, ಎಲ್ಲಾ ಊರುಗಳಲ್ಲೂ ಅದನ್ನು ಕಾಣಬಹುದಾಗಿದೆ.

ಪೂರ್ವಿಕರಾದ ಇಮಾಮರು ಕೇವಲ ಮೌಲಿದ್ ಪಾರಾಯಣದಿಂದ ಮಾತ್ರ ಸೀಮಿತಗೊಳಿಸಿಲ್ಲ. ಹೊರತು ಅದಕ್ಕಾಗಿ ಅವರು ಬೃಹತ್ ಗ್ರಂಥಗಳನ್ನೇ ರಚಿಸಿದ್ದಾರೆ. ಎಲ್ಲಾ ಕಾಲದಲ್ಲೂ ಇದು ನೆಲೆ ನಿಲ್ಲಬೇಕೆಂಬ ಇರಾದೆಯೊಂದಿಗೆ ಅವರು ಇದನ್ನು

ರಚಿಸಿದ್ದಾರೆ ಎಂದು ತಿಳಿದುಕೊಳ್ಳಬಹುದಾಗಿದೆ.

- ಮೌಲಿದ್ ಬಿದ್'ಅತ್ ಆಗಿದ್ದಲ್ಲಿ ಆ ಇಮಾಮರುಗಳು ಇದನ್ನು ರಚಿಸುವರೇ?
- ತಪ್ಪು ಸಂದೇಶವನ್ನು ಮುಸ್ಲಿಂ ಸಮುದಾಯಕ್ಕೆ ಅವರು ಸಮರ್ಪಿಸಿದರು ಎಂದು ಒಬ್ಬ ಮುಸ್ಲಿಂ ಹೇಳುವನೇ?

ಪುಟ್ಟ ಒಂದು ಕರಾಹತ್ ಎಂದು ಒಂದು ವಿಷಯದಲ್ಲಿ ಹೇಳುವಾಗ ಬಹಳ ಸೂಕ್ಷ್ಮತೆ ವಹಿಸಿದ್ದ ಅವರು ಶಿರ್ಕ್-ಬಿದ್'ಅತ್ ಗೆ ಬೇಕಾಗಿ ಸಪೋರ್ಟ್ ಮಾಡಿದರು ಎಂದು ಬಹುಷ ಇಬ್ಲೀಸನಲ್ಲದೇ ಇನ್ಯಾರು ಹೇಳಲಾರರು.

ಮೌಲಿದ್ ಗ್ರಂಥಗಳು ಹಲವಾರು ಇದೆಯಾದರು ಅವುಗಳಲ್ಲಿ ಕೆಲವೊಂದನ್ನು ಕೆಳಗೆ ನೀಡುತ್ತೇನೆ. ಅವುಗಳನ್ನು

ರಚಿಸಿದ ಇಮಾಮರ ಹೆಸರು, ಗ್ರಂಥದ ಹೆಸರು,
ಅವರ ಹಿಜರಿ ವರ್ಷ ಕೆಳಗೆ ನೀಡುತ್ತಿದ್ದೇನೆ.
(ಅವರ ಚರಿತ್ರೆಗಳು ಗ್ರಂಥಗಳಲ್ಲಿ ಲಭ್ಯವಿದ್ದು ಬೇಕಾಗಿ
ಬಂದಲ್ಲಿ ವಿವರಿಸುವೆನು. ಇಂಶಾ ಅಲ್ಲಾಹ್)

---

1. ಅತ್ತನ್'ವೀರ್ ಫೀ ಮೌಲಿದಿಲ್ ಬಶೀರಿನ್ನದಿ
ೀರ್

ಇಮಾಮ್ ಅಬುಲ್ ಖತ್ತಾಬ್ ಉಮರ್ ಬಿನ್
ಹಸನ್ ಬಿನ್ ಅಲಿಯ್ಯು ಬಿನ್ ಮುಹಮ್ಮದ್ ಬಿನ್
ಫರಜು ಬಿನ್ ಖಲಫ್ (ರ)
(ಹಿಜರಿ: 544--633)

2. ಜಾಮಿಉಲ್ ಆಸಾರ್ ಫೀ ಮೌಲಿದಿ
ನ್ನಬಿಯ್ಯಿಲ್ ಮುಖ್ತಾರ್

ಹಾಫಿಲ್ ಮುಹಮ್ಮದ್ ಬಿನ್ ಅಬೀಬಕರ್ ಬಿನ್
ಅಬ್ದುಲ್ಲಾಹಿಲ್ ಅದ್ದಿಮಶ್ಕೀ (ರ)
ಹಿಜರಿ: 777---842

## 3. ಅರ್ರಾಯಿಖ್ ಫೀ ಮೌಲಿದಿ ಖೈರಿಲ್ ಖಲಾಯಿಖ್

ಮೇಲೆ ಹೇಳಿದ ಹಾಫಿಲ್ ಅಬೀಬಕರ್(ರ) ಇದರ ರಚನೆಗಾರರು.

------------------------------------

## 4. ಅಲ್ ಮೌರಿದುಸ್ವಾದೀ ಫೀ ಮೌಲಿದಿಲ್ ಹಾದೀ

ಮೇಲೆ ಹೇಳಿದ ಹಾಫಿಲ್ ಅಬೀಬಕರ್ (ರ) ಇದರ ರಚನೆಗಾರರು.

ಇದನ್ನು ಇಮಾಮ್ ಶೈಕ್ ಖಲೀಫ (ರ) ತನ್ನ ಕಶ್ಫುಲ್ಲುನೂನ್ ನ 319 ರಲ್ಲಿ ವಿವರಿಸಿದ್ದಾರೆ.

---------------------

**5. ಅಲ್ ಮೌರಿದುಲ್ ಹನಿಯ್ಯ್ ಫಿಲ್ ಮೌಲಿದಿಸ್ಸನಿಯ್ಯ್.**

**المورد الهني في المولد السني**

**ಹಾಫಿಲುಲ್ ಇರಾಖೀ ಎಂಬ ಹೆಸರಿನಿಂದ ಪ್ರಸಿದ್ಧರಾದ ಹಾಫಿಲ್ ಅಬ್ದುರ್ರಹ್'ಮಾನ್ ಅಲ್ ಮಿಸ್ರಿ (ರ)**

**ಹಿಜರಿ: 725--808.**

**-------------------**

**6. ಅಲ್ ಫಖ್ರುಲ್ ಉಲ್'ವೀ ಫಿಲ್ ಮೌಲಿದಿನ್ನಬವೀ**

**الفخر العلوي في المولد النبوي**

**ಹಾಫಿಲು ಸ್ಸಖಾವೀ ಎಂಬ ಹೆಸರಿನಿಂದ ಪ್ರಸಿದ್ಧರಾದ ಹಾಫಿಲ್ ಮುಹಮ್ಮದ್ ಅಬ್ದುರ್ರಹ್'ಮಾನ್ ಅಲ್ ಖಾಹಿರಿ.**

**ಹಿಜರಿ: 831**

**---------------------------**

7. ಅಲ್ ಮೌರಿದುರ್ರವಿಯ್ಯಿ ಫಿಲ್ ಮೌಲಿದಿ ನ್ನಬವಿಯ್ಯಿ

المورد الروي في المولد النبوي

ಹನಫೀ ಮದ್’ಹಬ್ ನ ಪ್ರಸಿದ್ಧ ಉಲಮಾಗಳಲೊಬ್ಬರಾದ ಮುಲ್ಲಾ ಅಲಿಯ್ಯುಲ್ ಖಾರೀ (ರ) ಇದರ ರಚನೆಗಾರ.

ಹಿಜರಿ: 1014.

-------------------

8. ಶರ್ರಫಲ್ ಅನಾಂ

ಅಲ್ಲಾಮಾ ಅಹ್ಮದ್ ಬಿನ್ ಖಾಸಿಂ ಅಲ್ ಹರೀರೀ (ರ) ಹಿಜರಿ: 824.

ಇಮಾಮ್ ಇಬ್ನುಲ್ ಜೌಝೀ (ರ) ಬರೆದವುವೆಂದು ಅಭಿಪ್ರಾಯವಿದೆ.

ಹಲವಾರು ವ್ಯಾಖ್ಯಾನ ಗ್ರಂಥಗಳು ಈ ಮೌಲಿದ್ ಗೆ ಬರೆಯಲಾಗಿದ್ದು ದೇಶ- ವಿದೇಶಗಳಲ್ಲಿ ಈ ಮೌಲಿದ್ ಪ್ರಸಿದ್ಧಿ ಪಡೆದುಕೊಂಡಿದೆ.

## 9. ಮೌಲಿದ್ ಇಬ್ನ್ ಕಸೀರ್

مولد ابن كثير

ಇಬ್ನ್ ಕಸೀರ್ ಎಂಬ ಹೆಸರಿನಿಂದಲೇ ತಿಳಿಯಲ್ಪಡುವ ಹಾಫಿಲ್ ಇಮಾದುದ್ದೀನ್ ಇಸ್ಮಾಯೀಲ್ ಇಬ್ನ್ ಕಸೀರ್ ಇದರ ರಚನೆಗಾರ.

ಹಿಜರಿ: 774.

-------------

## 10. ಸುಬ್'ಹಾನ ಮೌಲಿದ್.

سبحان مولد

ಇಮಾಮ್ ಗಝ್ಝಾಲಿ (ರ) ಅಥವಾ ಶೈಖ್ ಖತೀಬ್ ಮುಹಮ್ಮದುಲ್ ಮದನೀ (ರ) ಬರೆದ ಮೌಲಿದೆಂದು ಅಭಿಪ್ರಾಯವಿದೆ.

ಇಮಾಮ್ ಗಝ್ಝಾಲೀ (ರ) ಬರೆದದ್ದೆಂಬುವುದಕ್ಕೆ ಆ ಮೌಲಿದ್ ನ ಕೊನೆಯಲ್ಲಿರುವ

واصفح ومن بجمع شمل واغفرن لمحمد بن محمد بن محمد

ಎಂಬ ಪ್ರಯೋಗ ಪುಷ್ಠಿ ನೀಡುತ್ತಿದೆ.
ಕಾರಣ, ಮುಹಮ್ಮದ್ ಬಿನ್ ಮುಹಮ್ಮದ್ ಬಿನ್ ಮುಹಮ್ಮದ್ ಎಂಬ ಹೆಸರಲ್ಲಿ ಪ್ರಚಾರದಲ್ಲಿರುವುದು ಇಮಾಮ್ ಗಝ್ಝಾಲಿಯ ಹೆಸರಾಗಿದೆ.

---------------

## 11. ಮಂಕೂಸ್ ಮೌಲಿದ್

منقوص مولد

500 ವರ್ಷಗಳ ಮುಂಚೆ ಪೊನ್ನಾಣಿ ಝೈನುದ್ದೀನ್ ಮಖ್ದೂಂ (ರ) ರಚಿಸಿದ ಮೌಲಿದಾಗಿದೆ ಇದು.
ಹಿಜರಿ: 872--928.
ಇಮಾಮ್ ಗಝ್ಝಾಲೀ (ರ) ರಚಿಸಿದ ಸುಬ್'ಹಾನ ಮೌಲಿದನ್ನು ಸಂಕ್ಷಿಪ್ತಗೊಳಿಸಿದ ಮೌಲಿದಾಗಿದೆ ಇದು.
ಆದುದರಿಂದಲೇ ಇದನ್ನು ಮಂಖೂಸ್ (ಸಂಕ್ಷಿಪ್ತಗೊಳಿಸಲ್ಪಟ್ಟದ್ದು) ಎಂಬ ಹೆಸರಿನಿಂದ ಕರೆಯಲ್ಪಡಲಾಯಿತು.

ಸ್ವಹಾಬಾ ಕಿರಾಮ್ ನ ಕಾಲದ ನಂತರ ಕೇರಳದಲ್ಲಿ ಇಸ್ಲಾಮ್ ಅಳಿದು ಹೋದ ಸಂದರ್ಭದಲ್ಲಿ ಇಸ್ಲಾಮ್ ಪ್ರಚುರಪಡಿಸಿದ ಮಖ್ದೂಂ ಕುಟುಂಬದವರೇ ಈ ಮೌಲಿದನ್ನು ರಚಿಸಿರುವಾಗ ಅವರು ಅದರಲ್ಲಿ ಶಿರ್ಕ್ - ಬಿದ್ ಅತ್ ಕಾಣಲಿಲ್ಲ. ಇಸ್ಲಾಮನ್ನು ಬೇಕಾದಂತೆ ಅವರು ಕಲಿತಿರುವುದರಿಂದ ಅವರಿಗೆ ಅದರಲ್ಲಿ ಸಂಶಯಗಳಿರಲಿಲ್ಲ. ಇಸ್ಲಾಮಿನ ಪ್ರಾಥಮಿಕ ಜ್ಞಾನ ಕೂಡಾ ಇಲ್ಲದ ವಹ್ಹಾಬೀ ಪಾದ್ರಿಗಳಿಗೆ ಅದರಲ್ಲಿ ಶಿರ್ಕ್ - ಬಿದ್'ಅತ್ ಕಂಡದ್ದು ಅದ್ಭುತವೇ ಸರಿ.

---------------

## 12. ಅಲ್ ಕವ್'ಕಬುಲ್ ಅನ್'ವರ್ ಅಲಾ ಇಖ್'ದಿಲ್ ಜೌಹರ್ ಫೀ ಮೌಲಿದಿಲ್ ಅಝ್'ಹರ್

الكوكب الأنور على عقد الجوهر في مولد النبي الأزهر

ಸಯ್ಯಿದ್ ಜ'ಅಫರ್ ಬಿನ್ ಇಸ್ಮಾಯೀಲ್ ಬಿನ್ ಝೈನುಲ್ ಆಬಿದೀನ್ (ರ)
ಹಿಜರಿ: 1317.

-------------------

13. ಇಖ್'ದಿಲ್ ಜೌಹರ್ ಫೀ ಮೌಲಿದಿಲ್ ಅಝ್'ಹರ್

عقد الجوهر في مولد النبي الأزهر

ಸಯ್ಯಿದ್ ಜ'ಅಫರ್ ಬಿನ್ ಹಸನ್ ಬಿನ್ ಅಬ್ದುಲ್ ಕರೀಂ ಅಲ್ ಬಿರ್'ಝಂಜೀ (ರ)
ಹಿಜರಿ: 1177.

--------------------------

14. ಫತ್'ಹುಲ್ಲಾಹಿ ಹಸ್'ಬೀ ವಕಫಾ ಫೀ ಮೌಲಿದಿಲ್ ಮುಸ್ತಫಾ

فتح الله حسبي وكفى في مولد المصطفى

برهان الدين أبو الصفاء علي الحسني العراقي المقدسي الشافعي
ಅಲ್ಲಾಮಾ ಬುರ್’ಹಾನುದ್ದೀನ್ ಅಬುಸ್ವಫಾ ಅಲಿ ಯ್ಯುಲ್ ಹಸನ್ ಅಲ್ ಇರಾಖೀ ಅಶ್ಶಾಫಿಈ.
ಹಿಜರಿ:810--887.

---------------------------

15. ಲಿಲ್ಲುಮ್ ಗಮಾಮ ಫೀ ಮೌಲಿದಿ ತಿಹಾಮ
ظل الغمامة في مولد تهامة.
ಅಹ್ಮದ್ ಬಿನ್ ಅಲಿಯ್ಯಿಬಿನ್ ಸಈದುಲ್ ಗರ್’ನಾತೀ (ರ)
ಹಿಜರಿ:673.

------------------------------------

16. ಅಲ್ ಕವಾಕಿಬುದ್ದುರ್ರಿಯ್ಯ ಫೀ ಮೌಲಿದಿ ಖೈರಿಲ್ ಬರಿಯ್ಯಃ
الكواكب الدرية في مولد خير البرية.
ಅಬೂಬಕರ್ ಬಿನ್ ಮುಹಮ್ಮದ್ ಬಿನ್

ಅಬೀಬಕರ್ ಹಬೀಶೀ ಅಶ್ಶಾಫಿಈ(ರ)
ಹಿಜರಿ:930

--------------------------

17. ಅದ್ದುರ್ರತುಸ್ಸನಿಯ್ಯ ಫೀ ಮೌಲಿದಿ ಖೈರಿಲ್ ಬರಿಯ್ಯ.
الدرة السنية في مولد خير البرية.
ಹಾಫಿಲ್ ಸ್ವಲಾಹುದ್ದೀನ್ ಖಲೀಲ್ ಬಿನ್ ಕೀಕಲದೀ ಅಲ್ ಅಲಾಈ (ರ).
ಹಿಜರಿ:694--- 761.

--------------------------

18. ಅಲ್ ಮವ್'ರಿದುಲ್ ಅದ್'ಬುಲ್ ಮುಈನ್ ಫೀ ಮೌಲಿದಿ ಸಯ್ಯಿದಿಲ್ ಖಲ್'ಖಿ ಅಜ್ಮಈನ್.
المورد العذب المعين في مولد سيد الخلق أجمعين.
ಮುಹಮ್ಮದ್ ಬಿನ್ ಅಬ್ದಿಲ್ಲಾಹಿ ಬಿನ್ ಮುಹಮ್ಮದ್ ಬಿನ್ ಮುಹಮ್ಮದ್ ಬಿನ್ ಅಬೀಬಕರ್ ಅಲ್

ಜಝೂಇರಿ(ರ).
ಹಿಜರಿ:707.

-----------------------------------

19. ಅಲ್ ಕಲಾಮು ಸ್ಸನಿಯ್ಯುಲ್ ಮುಸಫ್ಫಾ ಫೀ ಮೌಲಿದಿಲ್ ಮುಸ್ತಫಾ.
الكلام السني المصفى في مولد المصطفى.
ಯೂಸುಫ್ ಝಾದಾ ರೂಮೀ(ರ).
ಹಿಜರಿ:1085--1165.

-----------------------------------

20. ಮತ್ವಾಲಿಉಲ್ ಅನ್'ವಾರ್ ಫೀ ಮೌಲಿದಿ ನ್ನಬಿಯ್ಯಿಲ್ ಮುಖ್ತಾರ್
مطالع الأنوار في مولد النبي المختار
ಅಬ್ದುಲ್ಲಾಹಿ ಬಿನ್ ಅಲಿಯ್ಯು ಬಿನ್ ಅಬ್ದುರ್ರಹಮಾನ್ ಅಶ್ಶಾಫಿಈ (ರ)
ಹಿಜರಿ:1234.

21. ಸುರುರುಲ್ ಅಬ್’ರಾರ್ ಫೀ ಮೌಲಿದಿ ನ್ನಬಿಯ್ಯಿಲ್ ಮುಖ್ತಾರ್

سرر الابرار في مولد النبي المختار.

ಅಬ್ದುಲ್ ಫತ್ತಾಹ್ ಬಿನ್ ಅಬ್ದುಲ್ ಖಾದಿರ್ ಬಿನ್ ಸ್ವಾಲಿಹ್ ದಿಮಶ್ಖೀ(ರ).

ಹಿಜರಿ:1250.

-----------------------------

22. ಅಲ್ ಮುಂತಖಬುಲ್ ಮುಸಫ್ಫ ಫೀ ಅಖ್’ಬಾರಿ ಮೌಲಿದಿಲ್ ಮುಸ್ತಫಾ

المنتخب المصفي في أخبار مولد المصطفى

ಮುಹ್ಯುದ್ದೀನ್ ಅಬ್ದುಲ್ ಖಾದಿರ್ ಬಿನ್ ಶೈಖ್ ಬಿನ್ ಅಬ್ದಿಲ್ಲಾಹಿ ಅಲ್ ಹೈದರೂಸೀ ಅಲ್ ಹಳ್ರಮೀ (ರ).

ಹಿಜರಿ:987--1038).

---------------------

23. ಅಲ್ ಮನ್’ಹಲುಲ್ ಅದ್’ಬುಲ್ ಖರೀರ್ ಫೀ ಮೌಲಿದಿಲ್ ಬಶೀರಿನ್ನದೀರ್.

المنهل العذب القرير في مولد الهادي البشير النذير.

ಶೈಖ್ ಅಲಿಯ್ಯ್ ಬಿನ್ ಸುಲೈಮಾನ್ ಬಿನ್ ಅಹ್ಮದ್ ಬಿನ್ ಮುಹಮ್ಮದ್ ಅಲ್ ಮರ್ದಾವೀ ಅಲ್ ಹಂಬಲೀ(ರ).

ಹಿಜರಿ:885.

-------------------

24. ಮನಾಸಿಕುಲ್ ಹಜ್’ಝಿಲ್ ಮುಂತಖಾ ಮಿನ್ ಸಿಯರಿ ಮೌಲಿದಿನ್ನಬಿಯ್ಯಿಲ್ ಮುಸ್ತಫಾ.

مناسك الحجز المنتقي من سير مولد النبي المصطفي

ಮುಹಮ್ಮದ್ ಬಿನ್ ಮಸ್’ಊದ್ ಬಿನ್ ಮುಹಮ್ಮದ್ ಸಈದುದ್ದೀನ್ ಅಲ್ ಕಾಝುರೂನೀ .

ಹಿಜರಿ:758.

-------------------

25. ತಅ್'ನೀಸು ಅರ್'ಬಾಬಿಸ್ಸಫಾ ಫೀ ಮೌಲಿದಿ ಲ್ ಮುಸ್ತಫಾ.

تأنيس ارباب الصفا في مولد المصطفي.

ಅಸ್ಸೆಯ್ಯಿದ್ ಅಲಿಯ್ಯ್ ಬಿನ್ ಇಬ್ರಾಹೀಂ ಬಿನ್ ಮುಹಮ್ಮದ್ ಬಿನ್ ಇಸ್ಮಾಯೀಲ್ ಬಿನ್ ಸ್ವಲಾಹ್ (ರ).

ಹಿಜರಿ:1171--1236.

-------------------

26: ಅನ್ನಫ್'ಹತುಲ್ ಅಂಬರಿಯ್ಯ ಫೀ ಮೌಲಿದಿ ಖೈರಿಲ್ ಬರಿಯ್ಯ.

النفحة العنبرية في مولد خير البرية.

ಮುಹಮ್ಮದ್ ಬಿನ್ ಯಅ್'ಖೂಬ್ ಬಿನ್ ಇಬ್ರಾಹೀಂ ಅಲ್ ಫೈರೂಝಾಬಾದೀ.

ಹಿಜರಿ:729--817.

-----------------------------

**27. ಗೈಸುಲ್ ಮವಾಹಿಬಿಲ್ ಅಲಿಯ್ಯ ಫೀ ಶರಹಿ ಹುಕ್’ಮಿಲ್ ಅತ್ವಾಯಿಯ್ಯ.**

غيث المواهب العلية في شرح حكم العطائية.

**ಮುಹಮ್ಮದ್ ಬಿನ್ ಇಬ್ರಾಹೀಂ ಬಿನ್ ಅಬೀ ಬಕರ್ ಅಲ್ ಮಾಲಿಕೀ.**

**ಹಿಜರಿ:733--792.**

---------------------------

**28. ಜಾಮಿಉಲ್ ಆಸಾರ್ ಫೀ ಮೌಲಿದಿಲ್ ಮುಖ್ತಾರ್.**

جامع الاثار في مولد المختار.

-----------------------------

**29. ಅಲ್ ಮೌರಿದುಸ್ಸ್ವಾದೀ ಫೀ ಮೌಲಿದಿಲ್ ಹಾದೀ.**

المورد الصادي في مولد الهادي.

-------------------------------------

-------------------

**30. ಅಲ್ಲಫ್’ಳುರ್ರಾಇಖ್ ಫೀ ಮೌಲಿದಿ ಖೈರಿಲ್ ಖಲಾಯಿಖ್.**

اللفظ الرائق في مولد خير الخلائق

**ಈ ಮೂರರ ರಚನೆಗಾರರು ಇಬ್ನ್ ನಾಸಿರುದ್ದೀನ್ ಅದ್ದಿಮಶ್ಖೀ ಎಂಬ ಹೆಸರಲ್ಲಿ ಪ್ರಸಿದ್ಧರಾದ ಮುಹಮ್ಮದ್ ಬಿನ್ ಅಬೀಬಕರ್ ಅಬ್ದುಲ್ಲಾಹಿ ಬಿನ್ ಮುಹಮ್ಮದ್ ಅಲ್ ಹಾಫಿಲ್ ಶಂಸುದಿದ್ದೀನ್ ಅದ್ದಿಮಶ್ಖೀ**

**ಹಿಜರಿ:777---842.**

-----------------------------

● ಇವುಗಳನ್ನೆಲ್ಲಾ ರಚಿಸಿದ ಇಮಾಮರುಗಳನ್ನು

ಮುಬ್’ತದಿಅ್

ಎಂದು ಹೇಳಲು ವಹ್ಹಾಬಿಗಳಿಗೆ ಧೈರ್ಯವಿದೆಯೇ?

● ಈ ಇಮಾಮರು ಶಿರ್ಕ್-ಬಿದ್ ಅತ್ ಗಳನ್ನು

ಪ್ರಚಾರ ಮಾಡಿದರೆ?

ವಹ್ಹಾಬಿಗಳು ಇದಕ್ಕೆ ಉತ್ತರಿಸಬೇಕು.



ಅಲ್ಲಾಹನೇ ನೀ ಸ್ವೀಕರಿಸು..ಆಮೀನ್

---